RNI No. **KAR:IL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮಾರ್ಚ್ ೧೪, ೨೦೧೩ (ಫಾಲ್ಗುಣ ೨೩, ಶಕ ವರ್ಷ ೧೯೩೪)<br>Bangalore, Thursday, March 14, 2013 (Phalguna 23, Shaka Varsha 1934) | ಸಂಚಿಕೆ ೧೧<br>Issue 11 |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ, ನ್ಯಾಯಾಂಗ ಇಲಾಖೆ ಇವರ ಪ್ರಕಟಣೆ

**ಅಧಿಸೂಚನೆ ಸಂಖ್ಯೆ: 01/2013 ಆಡಳಿತ : ದಿನಾಂಕ: 21-02-2013**

**ವಿಷಯ:** ದಾವಣಗೆರೆ ಜಿಲ್ಲಾ ನ್ಯಾಯಾಂಗ ಘಟಕಕ್ಕೆ 12 ಶೀಘ್ರಲಿಪಿಗಾರರ (ಬ್ಯಾಕ್‌ಲಾಗ್) ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:**

1) ಸರ್ಕಾರಿ ಅಧಿಸೂಚನೆ ಸಂಖ್ಯೆ: LAW 230 LCE 2010 ದಿನಾಂಕ: 29-03-2011 ಹೊಸದಾಗಿ ಸೃಜಿಸಲಾಗಿರುವ 309 ಶೀಘ್ರಲಿಪಿಗಾರರ ಹುದ್ದೆಗಳನ್ನು ಸೃಜಿಸಿದ ಬಗ್ಗೆ.
2) ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II:36/2003 ದಿನಾಂಕ: 23-06-2011.
3) ಸರ್ಕಾರಿ ಅಧಿಸೂಚನೆ ಸಂಖ್ಯೆ: LAW 186 LAC 2011 ದಿನಾಂಕ:21-09-2011.
4) ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA- II/54/2011 ದಿನಾಂಕ: 01-10-2011– 'ಸಿ' ಮತ್ತು 'ಡಿ' ಗುಂಪಿನ ಖಾಲಿ ಹುದ್ದೆಗಳ ನೇಮಕಾತಿಗೆ ನೀಡಲಾಗಿರುವ ಅನುಮತಿ.
5) ಈ ಕಛೇರಿಯ ಅಧಿಸೂಚನೆ ಸಂಖ್ಯೆ: 03/2011 ದಿ: 23-11-2011
6) ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 7 ಎಸ್.ಆರ್.ಪಿ 2012 ದಿ: 21-04-2012 ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2012.
7) ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) ನಿಯಮಗಳು, 1982.
8) ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007.

ದಾವಣಗೆರೆ ಜಿಲ್ಲೆಯ ವಿವಿಧ ನ್ಯಾಯಾಲಯಗಳಲ್ಲಿ ಖಾಲಿ ಇರುವ ***ಶೀಘ್ರಲಿಪಿಗಾರರ ಹುದ್ದೆಗೆ*** ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು ಈ ಅಧಿಸೂಚನೆಯೊಂದಿಗೆ ಲಗತ್ತಿಸಿರುವ ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ ಅಥವಾ ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರವಣಿಗೆಯಲ್ಲಿ ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿ ***ದಿನಾಂಕ: 23-03-2013ರಂದು ಸಂಜೆ 5-00 ಗಂಟೆಯ ಒಳಗಾಗಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರಿಗೆ ತಲುಪುವಂತೆ ಸಲ್ಲಿಸತಕ್ಕದ್ದು.***

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 23-03-2013 ರಂದು ಸಂಜೆ 5-00 ಗಂಟೆಯವರೆಗೆ.**

**ಹುದ್ದೆಯ ವರ್ಗೀಕರಣ ::**

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ಮೀಸಲಾತಿ | ಹುದ್ದೆಗಳ ವರ್ಗೀಕರಣ | | | | | | |
|---|---|---|---|---|---|---|---|---|---|---|
| | | | | ಸಾ.ಅ. | ಪ.ಜಾ | ಪ.ಪಂ. | ಪ್ರ–I | II–ಎ | II-ಬಿ | III-ಎ |
| 1 | ಶೀಘ್ರಲಿಪಿಗಾರ (ಬ್ಯಾಕ್‌ಲಾಗ್ ಹುದ್ದೆಗಳು) | 12 | ಇತರೆ | 1 | – | 1 | 1 | 1 | 1 | 1 |
| | | | ಗ್ರಾಮೀಣ | 2 | 1 | – | – | – | – | – |
| | | | ಮಹಿಳೆ | 1 | 1 | – | – | – | – | – |
| | | | ಅಂ.ವಿ. | 1 | – | – | – | – | – | – |
| ಒಟ್ಟು | | | | 5 | 2 | 1 | 1 | 1 | 1 | 1 |

ಸಾ.ಅ.–ಸಾಮಾನ್ಯ ಅರ್ಹತೆ ಪ.ಜಾ.–ಪರಿಶಿಷ್ಟ ಜಾತಿ ಅಂ.ವಿ.–ಅಂಗವಿಕಲ ಪ.ಪಂ.–ಪರಿಶಿಷ್ಟ ಪಂಗಡ ಪ್ರ–1–ಪ್ರವರ್ಗ 1

**ಟಿಪ್ಪಣಿಃ** ಈ ಮೇಲಿನ ಹುದ್ದೆಗಳ ವರ್ಗೀಕರಣವನ್ನು ಈ ಕೆಳಗಿನ ಸರ್ಕಾರಿ ಆದೇಶಗಳನ್ನು ಆಧರಿಸಿ ವರ್ಗೀಕರಿಸಲಾಗಿದೆ.

1) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ 08 ಸೇನೆನಿ 95 ದಿನಾಂಕಃ 20–06–1995

2) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ 53 ಸೇನೆನಿ 2007 ದಿನಾಂಕಃ 04–01–2008.

3) ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 128 ಸೇನೆನಿ 2006 ದಿನಾಂಕಃ 01–08–2009

**1) ವೇತನ ಶ್ರೇಣಿಃ ಃ**

***ಶೀಘ್ರಲಿಪಿಗಾರರುಃ*** ರೂ. 14550–350–15600–400–17200–450–19000–500–21000–600–24600–700–26700 ಮತ್ತು ಇತರೆ ಭತ್ಯೆಗಳು.

2) **ವಯೋಮಿತಿಃ** ಕನಿಷ್ಟ ಃ– 18 ವರ್ಷಗಳು

| | | |
|---|---|---|
| ಗರಿಷ್ಟ ಃ– | 1) ಸಾಮಾನ್ಯ ವರ್ಗ | 35 ವರ್ಷ |
| | 2) ಪ್ರವರ್ಗ–2ಎ, 2–ಬಿ, 3–ಎ, 3–ಬಿ | 38 ವರ್ಷ |
| | 3) ಪ.ಜಾ. /ಪ.ಪಂ./ಪ್ರವರ್ಗ– 1 | 40 ವರ್ಷ |

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಮೇಲ್ಕಂಡ ಕನಿಷ್ಟ ವಯೋಮಿತಿಯನ್ನು ಹೊಂದಿರತಕ್ಕದ್ದು ಮತ್ತು ಗರಿಷ್ಟ ವಯೋಮಿತಿಯನ್ನು ಮೀರಿರಬಾರದು.

**ಟಿಪ್ಪಣಿಃ** ಗರಿಷ್ಟ ವಯೋಮಿತಿಯ ಸೌಲಭ್ಯ ಕೋರುವ ಅಭ್ಯರ್ಥಿಯು ವಿಧವೆಯಾಗಿದ್ದರೆ, ಅವಳು ವಿಧವೆಯೆಂಬ ಬಗ್ಗೆ ತಹಶೀಲ್ದಾರರ ದರ್ಜೆಗೆ ಕಡಿಮೆ ಅಲ್ಲದ ಕಂದಾಯ ಪ್ರಾಧಿಕಾರಿಯಿಂದ ಪಡೆದ ಪ್ರಮಾಣ ಪತ್ರಗಳನ್ನು ದ್ವಿ ಪ್ರತಿಯಲ್ಲಿ ಅರ್ಜಿಯೊಂದಿಗೆ ಲಗತ್ತಿಸಬೇಕು.

3) **ಪಿಂಚಣಿ ಸೌಲಭ್ಯಃ–**

ಸರ್ಕಾರದ ಆದೇಶ ಸಂಖ್ಯೆಃ ಎಫ್‌ಡಿ (ಎಸ್‌ಪಿಎಲ್)04 ಪಿಇಟಿ 2005 ದಿಃ 31–03–2006 ರಂತೆ.

4) **ವಿದ್ಯಾರ್ಹತೆಃ**

1) ಎಸ್. ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು.

2) ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ಅಥವಾ ಕರ್ನಾಟಕ ಸೆಕೆಂಡರಿ ಪ್ರೌಢ ಶಿಕ್ಷಣ ಪರೀಕ್ಷೆಗಳ ಮಂಡಳಿ ವತಿಯಿಂದ ನಡೆಸಲಾದ ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲಿ ಸೀನಿಯರ್ ದರ್ಜೆಯ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರತಕ್ಕದ್ದು ಅಥವಾ

3) ಕರ್ನಾಟಕ ತಾಂತ್ರಿಕ ಶಿಕ್ಷಣ ಇಲಾಖಾ ಮಂಡಳಿಯವರಿಂದ ನೀಡಲಾದ ಸೆಕ್ರೇಟ್ರಿಯಲ್ ಪ್ರ್ಯಾಕ್ಟೀಸ್‌ನಲ್ಲಿ ಡಿಪ್ಲೋಮೋ ಪಡೆದವರಾಗಿದ್ದು ಅದರಲ್ಲಿ ಆಂಗ್ಲ ಮತ್ತು ಕನ್ನಡ ಭಾಷೆಗಳೆರಡರಲ್ಲಿ ಬೆರಳಚ್ಚು ಮತ್ತು ಶೀಘ್ರಲಿಪಿ ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ದುಕೊಂಡು ಉತ್ತೀರ್ಣರಾಗಿರಬೇಕು.

4) ಗಣಕ ಯಂತ್ರದ ಬಗ್ಗೆ ಜ್ಞಾನ ಹೊಂದಿರಬೇಕು.

**5) ಆಯ್ಕೆ ವಿಧಾನ ಃ–**

ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು ಮತ್ತು ಕರ್ನಾಟಕ ಆಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಹಾಗೂ (ತಿದ್ದುಪಡಿ) ನಿಯಮಗಳು 2007ರ ಮೇರೆಗೆ ಸಂದರ್ಶನದ ಆಧಾರದ ಮೇಲೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗುವುದು.

**ಅಭ್ಯರ್ಥಿಗಳನ್ನು ಅರ್ಹತಾ ಪರೀಕ್ಷೆ ಮತ್ತು ಈ ಕೆಳಗೆ ನಮೂದಿಸಿರುವಂತೆ ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಿಕೊಳ್ಳಲಾಗುವುದು.**

1) ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿಂದ ನಾಮ ನಿರ್ದೇಶಿಸಲ್ಪಟ್ಟ ಪರೀಕ್ಷಕರು ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 5 ನಿಮಿಷಗಳಲ್ಲಿ ನೀಡುವ ಉಕ್ತ ಲೇಖನವನ್ನು ಸುಮಾರು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು.

2) ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

**6) ನಿರೀಕ್ಷಣಾ ಅವಧಿ ಃ**

ನೇಮಕ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ನಿರೀಕ್ಷಣಾ ನಿಯಮ) 1977 ರ ಪ್ರಕಾರ ಎರಡು ವರ್ಷಗಳ ನಿರೀಕ್ಷಣಾ ಅವಧಿಯಲ್ಲಿರತಕ್ಕದ್ದು ಮತ್ತು ಸದರಿ ಅವಧಿಯಲ್ಲಿ ತಮ್ಮ ಹುದ್ದೆಗಳಿಗೆ ಯಾವುದಾದರೂ ಇಲಾಖಾ ಪರೀಕ್ಷೆಗಳನ್ನು ನಿಯಮದಡಿ ಗೊತ್ತುಪಡಿಸಿದ್ದರೆ ಅವುಗಳಲ್ಲಿ ಉತ್ತೀರ್ಣರಾಗಬೇಕು.

7) **ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ ಃ–**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದು ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

**8) ಅರ್ಜಿಯೊಂದಿಗೆ ಲಗತ್ತಿಸಬೇಕಾಗಿರುವ ದಾಖಲಾತಿಗಳು ಃ**

ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಫೋಟೋ ಪ್ರತಿಗಳನ್ನು ಸ್ವದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಯಾವುದೇ ಕಾರಣಕ್ಕೂ ಮೂಲ ದಾಖಲಾತಿಗಳನ್ನು ಲಗತ್ತಿಸತಕ್ಕದ್ದಲ್ಲ.

1) ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು

2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ ಃ ವರ್ಗಾವಣೆ ಪ್ರಮಾಣ ಪತ್ರ. ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗದಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲಾತಿಗಳನ್ನು ಪರಿಗಣಿಸಲಾಗುವುದಿಲ್ಲ.

3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ 2ಎ, ಪ್ರವರ್ಗ 2ಬಿ, ಪ್ರವರ್ಗ 3ಎ ಮತ್ತು ಪ್ರವರ್ಗ **3ಬಿ** ಗಳ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ ಹಾಗೂ ವಯೋಮಿತಿ ಸಡಿಲಿಕೆ ಕೋರಿದ್ದಲ್ಲಿ)

4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ –1 ಮತ್ತು 2ರಲ್ಲಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದು (ಮೀಸಲಾತಿ ಕೋರಿದ್ದಲ್ಲಿ) ಅದರ ಪ್ರತಿಯನ್ನು ಲಗತ್ತಿಸುವುದು.

5) ಅಂಗವಿಕಲತೆಯ ಕುರಿತು ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

6) ಅಭ್ಯರ್ಥಿಯು ವಾಸವಾಗಿರುವ ಸ್ಥಳದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರ ಲಗತ್ತಿಸತಕ್ಕದ್ದು. ಅದು ಅರ್ಜಿ ಸ್ವೀಕರಿಸುವ ದಿನಾಂಕದಿಂದ 6 ತಿಂಗಳೊಳಗೆ ಪಡೆದದ್ದಿರಬೇಕು. ಅದಕ್ಕಿಂತಲೂ ಹಿಂದಿನದಾಗಿದ್ದರೆ ತಿರಸ್ಕರಿಸಲಾಗುವುದು.

7) ವಿದ್ಯಾರ್ಹತೆ, ಜನ್ಮ ದಿನಾಂಕ, ಶಾಲಾ ಮುಖ್ಯಸ್ಥರಿಂದ ಪಡೆದ ನಡತೆ ಪ್ರಮಾಣ ಪತ್ರ, ಅಂಕಪಟ್ಟಿ ಸದರಿ (ಇವುಗಳ ಸ್ವದೃಢೀಕೃತ ಪ್ರತಿಗಳನ್ನು ಲಗತ್ತಿಸತಕ್ಕದ್ದು)

8) 5–00 ರೂಪಾಯಿ ಅಂಚೆ ಚೀಟಿಯನ್ನೊಳಗೊಂಡ ಸ್ವ ವಿಳಾಸಿತ ಲಕೋಟೆ

9) ಅರ್ಜಿಯ ಮೇಲೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಅಂಟಿಸತಕ್ಕದ್ದು ಹಾಗೂ ಅದರ ಮೇಲೆ ತಮ್ಮ ಸಹಿಯನ್ನು ಹಾಕತಕ್ಕದ್ದು.

10) ಅಭ್ಯರ್ಥಿಯು ಭಾರತೀಯ ನಾಗರೀಕನಲ್ಲದಿದ್ದಲ್ಲಿ ಜಿಲ್ಲಾಧಿಕಾರಿ /ಜಿಲ್ಲಾ ದಂಡಾಧಿಕಾರಿಯವರು ನೀಡಿರುವ ನಾಗರೀಕ ದೃಢೀಕರಣ ಪತ್ರ

11) ಅಭ್ಯರ್ಥಿಗಳು ನಿವಾಸಿ ದೃಢೀಕರಣ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**9) ಪ್ರಮುಖವಾದ ಸೂಚನೆಗಳುಃ**

1) ಅರ್ಜಿಯನ್ನು ಈ ಅಧಿಸೂಚನೆಗೆ ಲಗತ್ತಿಸಿದ ನಿಗದಿತ ನಮೂನೆಯ ಬೆರಳಚ್ಚು ಪ್ರತಿ ಅಥವಾ ಗಣಕೀಕೃತ ಪ್ರತಿಯಲ್ಲಿ ತಮ್ಮ ಸ್ವಂತ ಕೈಬರವಣಿಗೆಯಲ್ಲಿ ಪೂರ್ಣ ವಿವರಗಳೊಂದಿಗೆ ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿ ಸಲ್ಲಿಸತಕ್ಕದು. ಅಪೂರ್ಣ ವಿವರಗಳನ್ನೊಳಗೊಂಡ ಅರ್ಜಿಗಳನ್ನು ಹಾಗೂ ಜೆರಾಕ್ಸ್ ಪ್ರತಿಯಲ್ಲಿ ಸಲ್ಲಿಸಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2) ಅವನ ಃ ಅವಳ ಅಭ್ಯರ್ಥಿಕೆಗಾಗಿ ಅಧಿಕಾರಿಗಳಿಂದಾಗಲೀ ಅಥವಾ ಅಧಿಕಾರೇತರರಿಂದಾಗಲೀ ಯಾವುದೇ ರೀತಿಯಲ್ಲಿ ಬಾಹ್ಯ ಬೆಂಬಲವನ್ನು ಪಡೆಯಲು ಪ್ರಯತ್ನಿಸುವ ಯಾವುದೇ ವ್ಯಕ್ತಿಯು ರಾಜ್ಯ ಸೇವೆಯ ನೇಮಕಾತಿಗೆ ಅರ್ಹನಾಗಿರುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮರುದಿನದಂದು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು. ಕೊನೆಯ ದಿನಾಂಕದ ನಂತರ ಈ ಕಛೇರಿಗೆ ಬರುವ ಯಾವುದೇ ಅರ್ಜಿಗಳನ್ನು ಹಾಗೂ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

4) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸುವವರು ಪ್ರತಿ ಹುದ್ದೆಗೂ ಪ್ರತ್ಯೇಕವಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

5) ಅರ್ಜಿಯಲ್ಲಿ ಹಾಗೂ ಅರ್ಜಿಯನ್ನು ಒಳಗೊಂಡಿರುವ ಲಕೋಟೆಯ ಮೇಲೆ ಅರ್ಜಿ ಸಲ್ಲಿಸಲಾಗುತ್ತಿರುವ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

6) ಅಭ್ಯರ್ಥಿಗಳು ಅರ್ಜಿಯ ಮೇಲ್ಭಾಗದ ಬಲಗಡೆಯ ತುದಿಯಲ್ಲಿ ಕೋರಿರುವ ಮೀಸಲಾತಿಯನ್ನು ತಪ್ಪದೆ ನಮೂದಿಸತಕ್ಕದ್ದು.

7) ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಿದ್ದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

8) ಅಭ್ಯರ್ಥಿಗಳಿಗೆ ಸಂದರ್ಶನದ ಬಗ್ಗೆ ಈ ಕಛೇರಿಯಿಂದ ಯಾವುದೇ ಮಾಹಿತಿಯು ಬಾರದೇ ಇದ್ದರೆ, ಅವರು ಸಂದರ್ಶನಕ್ಕೆ ಆಯ್ಕೆಯಾಗಿಲ್ಲ ಎಂದು ಭಾವಿಸತಕ್ಕದ್ದು ಮತ್ತು ಈ ರೀತಿ ತಿರಸ್ಕೃತ ಅರ್ಜಿಗಳ ಬಗ್ಗೆ ಅಥವಾ ಸಂದರ್ಶನಕ್ಕೆ ಅನರ್ಹರಾದ ಬಗ್ಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಆಸ್ಪದವಿರುವುದಿಲ್ಲ.

9) ಅಧಿಸೂಚನೆಯಲ್ಲಿ ನಮೂದಿಸಿರುವ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ, ಗ್ರಾಮೀಣ ಅಭ್ಯರ್ಥಿಗಳಿಂದ ನಿಗಧಿಪಡಿಸಿದಷ್ಟು ಅರ್ಜಿಗಳು ಬಾರದಿದ್ದಲ್ಲಿ ಅಥವಾ ಸೂಕ್ತ ಅಭ್ಯರ್ಥಿಯು ದೊರಕದಿದ್ದಲ್ಲಿ ಅದೇ ವರ್ಗದ ಪುರುಷ ಅಥವಾ ಇತರೇ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

10) ಅಭ್ಯರ್ಥಿಯು ಎಲ್ಲಾ ಪ್ರಮಾಣ ಪತ್ರಗಳು, ಅಂಕಪಟ್ಟಿಗಳು ಮುಂತಾದವುಗಳನ್ನು ಒಳಗೊಂಡ ಅರ್ಜಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರಿಗೆ ದಿನಾಂಕಃ **23–03–2013**ರ ಸಂಜೆ **5–00** ಗಂಟೆಯ ಒಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಕಳುಹಿಸಬೇಕು.

11) ಅಭ್ಯರ್ಥಿಗಳು ಮೀಸಲಾತಿ ಕೋರಿ ಸಲ್ಲಿಸಿದ ನಿಗದಿತ ಪ್ರಮಾಣ ಪತ್ರ ಅಥವಾ ಇನ್ನಿತರ ಯಾವುದೇ ದಾಖಲಾತಿಗಳು ತಪಾಸಣಾ ಅವಧಿಯಲ್ಲಿ ಸುಳ್ಳೆಂದು ಕಂಡು ಬಂದರೆ ಅವರ ವಿರುದ್ಧ ಭಾರತೀಯ ದಂಡ ಸಂಹಿತೆ ಕಲಂ. ಗಳಡಿ ಶಿಕ್ಷೆಗೆ ಗುರಿಪಡಿಸಲಾಗುವುದು ಮತ್ತು ಅವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

12) ಅಭ್ಯರ್ಥಿಗಳು ಆಯ್ಕೆಗೊಂಡರೆ, ದಾವಣಗೆರೆ ಜಿಲ್ಲೆಯ ಯಾವುದೇ ನ್ಯಾಯಾಲಯದಲ್ಲಿಯಾದರೂ ಕಾರ್ಯ ನಿರ್ವಹಿಸಲು ಸಿದ್ಧರಿರತಕ್ಕದ್ದು.

**ಸಿ.ಚಂದ್ರಮಲ್ಲೇಗೌಡ,**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ದಾವಣಗೆರೆ.

:: ಅರ್ಜಿ ನಮೂನೆ ::

**ಗೌ: ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**
**ದಾವಣಗೆರೆ ಜಿಲ್ಲೆ, ದಾವಣಗೆರೆ – ಇವರಿಗೆ.**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ನ್ಯಾಯಾಂಗ ಘಟಕದ ಅಧಿಸೂಚನೆ ಸಂಖ್ಯೆ:01/2013 ದಿನಾಂಕ: **21/02/2013**ರ ಮೇರೆಗೆ ____________ ಹುದ್ದೆಗೆ ____________ ಮೀಸಲಾತಿ ವರ್ಗದಡಿ ಆಯ್ಕೆ ಬಯಸಿ ಈ ಕೆಳಗಿನ ವಿವರಗಳನ್ನೊಳಗೊಂಡ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

ಸ್ವದೃಢೀಕರಿಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು

| | | | | | |
|---|---|---|---|---|---|
| 1 | **ಅಭ್ಯರ್ಥಿಯ ಹೆಸರು**<br>(ಸ್ಪಷ್ಟವಾಗಿ ದಪ್ಪ ಅಕ್ಷರಗಳಲ್ಲಿ ಬರೆಯಬೇಕು) | : | | | |
| 2 | ಅಭ್ಯರ್ಥಿಯ ತಂದೆಯ / ತಾಯಿಯ / ಗಂಡನ /ಹೆಂಡತಿಯ / ಪೋಷಕರ ಹೆಸರು ಮತ್ತು ವೃತ್ತಿ | : | | | |
| 3 | ಅಭ್ಯರ್ಥಿಯ ಪೂರ್ಣ ವಿಳಾಸ | : | | | |
| 4 | ಅಭ್ಯರ್ಥಿಯು ಸ್ತ್ರೀಯರೇ ಅಥವಾ ಪುರುಷರೇ | : | | | |
| 5 | ಹುಟ್ಟಿದ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕಕ್ಕೆ ವಯಸ್ಸು,<br>ಸೂಕ್ತ ದಾಖಲೆಯನ್ನು ಲಗತ್ತಿಸಕ್ಕದ್ದು | : | | | |
| 6 | ಅಭ್ಯರ್ಥಿಯ ರಾಷ್ಟ್ರೀಯತೆ ಮತ್ತು ಜಾತಿ | : | | | |
| 7 | ಅಭ್ಯರ್ಥಿಯು ಪ.ಜಾ. / ಪ್ರವರ್ಗ–1 / 2ಎ / 2ಬಿ / 3ಎ / 3ಬಿ ಗೆ ಸೇರಿರುವಿರಾ ? ಅಂಗವಿಕಲರೇ? ವಿಧವೆಯೇ?<br>(ಹಾಗಿದ್ದಲ್ಲಿ ಆ ಕುರಿತು ಸಕ್ಷಮ ಪ್ರಾಧಿಕಾರದಿಂದ ಪಡೆದ ನಕಲು ಪ್ರತಿಯನ್ನು ಲಗತ್ತಿಸತಕ್ಕದ್ದು) | : | | | |
| 8 | ಅಭ್ಯರ್ಥಿಯು ಗ್ರಾಮೀಣ ಅಭ್ಯರ್ಥಿಯೇ? (ಹಾಗಿದ್ದಲ್ಲಿ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು) | : | | | |
| 9 | ಶೈಕ್ಷಣಿಕ ವಿದ್ಯಾರ್ಹತೆ : | | **ಉತ್ತೀರ್ಣರಾದ ವರ್ಷ ಮತ್ತು ತಿಂಗಳು** | **ಗರಿಷ್ಠ ಅಂಕಗಳು** | **ಪಡೆದ ಅಂಕಗಳು** |
| | 1) 10ನೇ ತರಗತಿ<br>2) ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ<br>3) ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ<br>4) ಕನ್ನಡ ಬೆರಳಚ್ಚು ಪ್ರೌಢದರ್ಜೆ<br>5) ಆಂಗ್ಲ ಬೆರಳಚ್ಚು ಪ್ರೌಢದರ್ಜೆ<br>6) ಕನ್ನಡ ಬೆರಳಚ್ಚು ಕಿರಿಯ ದರ್ಜೆ<br>7) ಆಂಗ್ಲ ಬೆರಳಚ್ಚು ಕಿರಿಯ ದರ್ಜೆ | :<br>:<br>:<br>:<br>:<br>:<br>: | | | |
| 10 | ಗಣಕ ಯಂತ್ರ ವಿದ್ಯಾಭ್ಯಾಸ (ದಾಖಲಾತಿ ಲಗತ್ತಿಸುವುದು) | : | | | |
| 11 | ಇತರೆ ಹೆಚ್ಚುವರಿ ವಿದ್ಯಾರ್ಹತೆ | : | | | |
| 12 | ವಿವಾಹಿತರೇ / ಅವಿವಾಹಿತರೇ<br>ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಪತಿ / ಪತ್ನಿಯನ್ನು ಹೊಂದಿದ್ದೀರಾ? | : | | | |

| | | | |
|---|---|---|---|
| 13 | ಅಭ್ಯರ್ಥಿಗಳು ಯಾವುದೇ ಅಪರಾಧಗಳನ್ನು ಎದುರಿಸುತ್ತಿರುವಿರಾ ಅಥವಾ ನಿಮ್ಮ ವಿರುದ್ಧ ಯಾವುದೇ ಅಪರಾಧವನ್ನು ನೋಂದಾಯಿಸಿಕೊಳ್ಳಲಾಗಿದೆಯೇ? | ಃ | |
| 14 | ಅಭ್ಯರ್ಥಿಗಳು ಯಾವುದಾದರೂ ಸರ್ಕಾರಿ ನೌಕರಿಯಲ್ಲಿದ್ದೀರಾ? | ಃ | |
| 15 | ಲಗತ್ತಿಸಿರುವ ದಾಖಲಾತಿಗಳು | ಃ | |

ಮೇಲ್ಕಂಡ ವಿವರಣೆಗಳು ಸತ್ಯವಾಗಿರುತ್ತವೆ ಹಾಗೂ ಸರಿಯಾಗಿರುತ್ತವೆ ಎಂದು ಪ್ರಮಾಣೀಕರಿಸುತ್ತೇನೆ. ಮೇಲ್ಕಂಡ ಮಾಹಿತಿಗಳು ಸುಳ್ಳು ಮಾಹಿತಿ ಎಂದು ತಿಳಿದು ಬಂದಲ್ಲಿ ಕಾನೂನು ರೀತ್ಯಾ ತೆಗೆದುಕೊಳ್ಳುವ ಕ್ರಮಕ್ಕೆ ಬದ್ಧನಾಗಿರುತ್ತೇನೆ.

**ಸ್ಥಳ ಃ** ___________________________

**ದಿನಾಂಕ ಃ** **ಅಭ್ಯರ್ಥಿಯ ಸಹಿ**

**PR** 37

## ಶಿವಮೊಗ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ,

### ಅಧಿಸೂಚನೆ

**ಸಂಖ್ಯೆಃ ADM.DJS.4266-305/2013, ದಿನಾಂಕ ಃ 22 ನೇ ಫೆಬ್ರವರಿ ಮಾಹೆ 2013.**

**ವಿಷಯ ಃ** ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು-ನಕಲುಗಾರ ಹಾಗೂ ಜವಾನ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ ಃ**
1. ಉಚ್ಚ ನಾಯಾಲಯದ ಪತ್ರ ಸಂಖ್ಯೆಃ LCA .II.128/2012, ದಿನಾಂಕ ಃ 21.01.2013.
2. ಸರ್ಕಾರಿ ಆದೇಶ ಸಂಖ್ಯೆಃ LAW 112 LCE 2012 ದಿನಾಂಕ ಃ 28.12.2012.
3. ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ. 97 ಸೆನೆನಿ. 2002 ದಿನಾಂಕ ಃ 22.11.2002
4. ಸರ್ಕಾರಿ ಆದೇಶ ಸಂಖ್ಯೆಃ DPAR 08. SRS. 95 ದಿನಾಂಕ ಃ 20.6.1995.
5. ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ. 53 ಸೆನೆನಿ. 2007 ದಿನಾಂಕ ಃ 4.1.2008.
6. ಸರ್ಕಾರಿ ಅಧಿಸೂಚನೆ ಸಂಖ್ಯೆಃ LAW 01 LAC 2005 ದಿನಾಂಕ ಃ 13-2-2008.
7. ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ. 128 ಸೆನೆನಿ. 2006 ದಿನಾಂಕ ಃ 01.08.2009.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಃ 30.03.2013.**

ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಘಟಕದ ವಿವಿಧ ನ್ಯಾಯಾಲಯಗಳಲ್ಲಿ ಕೆಳಗೆ ವಿವರಿಸಿರುವಂತೆ ಖಾಲಿ ಇರುವ ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು-ನಕಲುಗಾರ ಮತ್ತು ಜವಾನ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಅಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳು ಈ ಅಧಿಸೂಚನೆಗೆ ಲಗತ್ತಿರುವ ಅರ್ಜಿ ನಮೂನೆಯಲ್ಲಿ, ಬೇರೆ ಬೇರೆ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

**1. ಶೀಘ್ರಲಿಪಿಗಾರರು (Stenographer)**

(1) ಹುದ್ದೆಗಳ ಸಂಖ್ಯೆ ಃ 04

(2) ವೇತನ ಶ್ರೇಣಿ ಃ 14550-350-15600-400-17200-450-19000-500-21000-600-24600-700-26700 ಹಾಗೂ ಇತರೆ ಭತ್ಯೆಗಳು.

**(3) ಹುದ್ದೆಗಳ ವರ್ಗೀಕರಣ ಃ**

| | ಇತರೆ | ಗ್ರಾಮೀಣ ಅಭ್ಯರ್ಥಿ | ಒಟ್ಟು |
|---|---|---|---|
| **ಸಾ.ಅ** | **01** | **01** | **02** |
| **ಪರಿಶಿಷ್ಟ ಜಾತಿ** | **-** | **01** | **01** |
| **ಪ್ರವರ್ಗ-2ಎ** | **01** | **-** | **01** |
| **ಒಟ್ಟು** | **02** | **02** | **04** |

**(4) ಶೈಕ್ಷಣಿಕ ವಿದ್ಯಾರ್ಹತೆ ಃ-**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಮತ್ತು ಶೀಘ್ರಲಿಪಿಯಲ್ಲಿ ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

**2. ಬೆರಳಚ್ಚುಗಾರ (TYPIST)**

(1) ಹುದ್ದೆಗಳ ಸಂಖ್ಯೆ ಃ 05

(2) ವೇತನ ಶ್ರೇಣಿ ಃ 11600-200-12000-250-13000-300-14200-350-15600-400-17200-450-19000-500-21000 ಹಾಗೂ ಇತರೆ ಭತ್ಯೆಗಳು.

(3) ಹುದ್ದೆಗಳ ವರ್ಗೀಕರಣ :

| | ಇತರೆ | ಗ್ರಾಮೀಣ ಅಭ್ಯರ್ಥಿ | ಮಹಿಳೆ | ಒಟ್ಟು |
|---|---|---|---|---|
| ಸಾ.ಅ | 01 | – | 01 | 02 |
| ಪರಿಶಿಷ್ಟ ಜಾತಿ | – | 1 | –– | 01 |
| ಪ್ರವರ್ಗ – 1 | – | 1 | – | 01 |
| ಪ್ರವರ್ಗ – 2ಎ | 01 | –– | – | 01 |
| ಒಟ್ಟು | 02 | 02 | 01 | 05 |

(4) ಶೈಕ್ಷಣಿಕ ವಿದ್ಯಾರ್ಹತೆ :–

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಹಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

3. ಬೆರಳಚ್ಚು ನಕಲುಗಾರ (TYPIST COPYIST)

(1) ಹುದ್ದೆಗಳ ಸಂಖ್ಯೆ : 02

(2) ವೇತನ ಶ್ರೇಣಿ : 11600–200–12000–250–13000–300–14200–350–15600–400–17200–450–19000–500–21000 ಹಾಗೂ ಇತರೆ ಭತ್ಯೆಗಳು.

(3) ಹುದ್ದೆಗಳ ವರ್ಗೀಕರಣ :

| | ಇತರೆ | ಮಾಜಿ ಸೈನಿಕ | ಒಟ್ಟು |
|---|---|---|---|
| ಸಾ.ಅ | – | 01 | 01 |
| ಪರಿಶಿಷ್ಟ ಜಾತಿ | 01 | – | 01 |
| ಒಟ್ಟು | 01 | 01 | 02 |

(4) ಶೈಕ್ಷಣಿಕ ವಿದ್ಯಾರ್ಹತೆ

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ.ಪರೀಕ್ಷೆಯಲ್ಲಿ ಉತ್ತೀರ್ಣತೆ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಬೆರಳಚ್ಚು ಕಿರಿಯ ದರ್ಜೆ ಪರೀಕ್ಷೆ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

4. ಜವಾನರು : (Peon)

(1) ಹುದ್ದೆಗಳ ಸಂಖ್ಯೆ: 12

(2) ವೇತನ ಶ್ರೇಣಿ : 9600–200–12000–250–13000–300–14200–350–14550 ಹಾಗೂ ಇತರೆ ಭತ್ಯೆಗಳು.

(3) ಹುದ್ದೆಗಳ ವರ್ಗೀಕರಣ : –

| | ಇತರೆ | ಗ್ರಾಮೀಣ ಅಭ್ಯರ್ಥಿ | ಮಹಿಳೆ | ಮಾಜಿ ಸೈನಿಕ | ಒಟ್ಟು |
|---|---|---|---|---|---|
| ಸಾ.ಅ | 01 | 02 | 02 | 01 | 06 |
| ಪರಿಶಿಷ್ಟ ಜಾತಿ | – | 01 | 01 | 01 | 03 |
| ಪ್ರವರ್ಗ– 1 | – | 01 | – | – | 01 |
| ಪ್ರವರ್ಗ–2ಎ | – | 01 | 01 | – | 02 |
| ಒಟ್ಟು | 01 | 05 | 04 | 02 | 12 |

(4) ಶೈಕ್ಷಣಿಕ ವಿದ್ಯಾರ್ಹತೆ

(ಅ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

(ಆ) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

5. ಮೇಲ್ಕಂಡ ಹುದ್ದೆಗಳ ವರ್ಗೀಕರಣವನ್ನು ಈ ಕೆಳಕಂಡ ಸರ್ಕಾರಿ ಆಜ್ಞೆಗಳ ಪ್ರಕಾರ ಮಾಡಲಾಗಿದೆ:

(1) ಸರ್ಕಾರಿ ಆದೇಶ ಸಂಖ್ಯೆ: DPAR 08 SRS 95, ದಿನಾಂಕ 20–6–1995.

(2) ಸರ್ಕಾರಿ ಆದೇಶ ಸಂಖ್ಯೆ: DPAR 97 SEN 2002, ದಿನಾಂಕ 22–11–2002.

(3) ಸರ್ಕಾರಿ ಆದೇಶ ಸಂಖ್ಯೆ: DPAR 08 SRS 95, ದಿನಾಂಕ 4–1–2008.

(4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 128 ಸೆನೆನಿ 2006 ದಿನಾಂಕ:1.8.2009.

6. ವಯೋಮಿತಿ:

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

(ಬ) ಗರಿಷ್ಠ ವಯೋಮಿತಿಃ ಸಾಮಾನ್ಯ ವರ್ಗ ಃ 35 ವರ್ಷಗಳು

2ಎ, 2ಬಿ, 3ಎ, 3ಬಿ ಃ 38 ವರ್ಷಗಳು

ಪರಿಶಿಷ್ಟ ಜಾತಿ ಃಪರಿಶಿಷ್ಟ ಪಂಗಡ ಃ ಪ್ರವರ್ಗ–1 ಃ 40 ವರ್ಷಗಳು

**ವಿಃಸೂಃ** ಮಾಜಿ ಸೈನಿಕರಿಗೆ ಗರಿಷ್ಠ ವಯೋಮಿತಿ ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ಸಡಿಲಿಕೆ ಮತ್ತು ವಿಧವೆಯವರಿಗೆ ಮತ್ತು ಅಂಗವಿಕಲರಿಗೆ 10 ವರ್ಷಗಳ ಸಡಿಲಿಕೆ.

**7. ಅರ್ಜಿ ಸಲ್ಲಿಸುವ ವಿಧಾನ ಃ**

(1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಈ ಕೆಳಗೆ ನಮೂದಿಸಿದ ಸ್ವದೃಢೀಕರಿಸಿದ ದಾಖಲೆಗಳೊಂದಿಗೆ ಸಲ್ಲಿಸಬೇಕು.

(2) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯನ್ನು ತೋರಿಸುವ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳ ಸ್ವದೃಢೀಕರಿಸಿದ ದಾಖಲೆಗಳು

(3) ಜಾತಿ ಮೀಸಲಾತಿ ಃ ಗ್ರಾಮೀಣ ಅಭ್ಯರ್ಥಿ ಃ ಮಾಜಿ ಸೈನಿಕ ಃ ಅಂಗವಿಕಲ ಃ ವಿಧವಾ, ಇತರೆ ಮೀಸಲಾತಿ ಕೋರುವ ಬಗ್ಗೆ ಸಂಬಂಧಿಸಿದವರಿಂದ ಪಡೆದ ದಾಖಲಾತಿಗಳ ಸ್ವದೃಢೀಕರಿಸಿದ ದಾಖಲೆಗಳು

(4) ಹುಟ್ಟಿದ ತಾರೀಖನ್ನು ತೋರಿಸುವ ಬಗ್ಗೆ ದೃಢೀಕರಣ ಪ್ರಮಾಣ ಪತ್ರ

(5) ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸುವುದು.

**8. ಆಯ್ಕೆ ವಿಧಾನ ಃ**

ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007ರ ಪ್ರಕಾರ.

**ಶೀಘ್ರಲಿಪಿಗಾರರ ಹುದ್ದೆಗೆ ಃ–**

(1) ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 5 ನಿಮಿಷಗಳ ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು

(2) ಸಂದರ್ಶನ

**ಬೆರಳಚ್ಚುಗಾರರ ಹಾಗೂ ಬೆರಳಚ್ಚು ನಕಲುಗಾರರ ಹುದ್ದೆಗೆ ಃ–**

(1) 15 ನಿಮಿಷಗಳ ಉಕ್ತಲೇಖನವನ್ನು ಬೆರಳಚ್ಚುಪಡಿಸತಕ್ಕದ್ದು

(2) ಸಂದರ್ಶನ

**ಜವಾನ ಹುದ್ದೆಗೆಃ–**

ಹುದ್ದೆಯ ಬಗ್ಗೆ ಅಭ್ಯರ್ಥಿ ಹೊಂದಿರುವ ಸಾಮರ್ಥ್ಯ ಮತ್ತು ಅರ್ಹತೆಯ ಬಗ್ಗೆ ಸಂದರ್ಶನ.

9. ಅಭ್ಯರ್ಥಿಯು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವುದು ಕಂಡುಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಃಸಲಾಗುವುದಿಲ್ಲ.

10. ಅರ್ಜಿಗಳನ್ನು ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ ಕಛೇರಿಗೆ ದಿನಾಂಕ ಃ 30.03.2013 ರಂದು ಸಂಜೆ 5.00 ಘಂಟೆಯ ಒಳಗಾಗಿ ಸಲ್ಲಿಸತಕ್ಕದ್ದು ಹಾಗೂ ಒಂದು ವೇಳೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

11. ಮಹಿಳಾ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು, ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದ ಪಕ್ಷದಲ್ಲಿ ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳಲಾಗುವುದು.

**12. ಅಭ್ಯರ್ಥಿಗಳಿಗೆ ಸೂಚನೆ ಃ–**

(1) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ ಹಾಗೂ ಮೀಸಲಾತಿ ಹಾಗೂ ವಯೋ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ನೀಡದ ಅರ್ಜಿಗಳನ್ನು ಯಾವುದೇ ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.

(2) ಸರ್ಕಾರಿ ಹಾಗೂ ಅರೆಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

(3) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5–00 ರೂ. ಸ್ಟಾಂಪನ್ನು ಅಂಟಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.

(4) ಅರ್ಜಿದಾರರು ಯಾವ ಹುದ್ದೆಗೆ ಅರ್ಜಿಗಳನ್ನು ಸಲ್ಲಿಸುತ್ತಾರೆ ಎಂಬುದನ್ನು ದಪ್ಪ ಅಕ್ಷರದಲ್ಲಿ ಲಕೋಟೆಯ ಮೇಲೆ ನಮೂದಿಸತಕ್ಕದ್ದು.

**ಆರ್.ಎಂ.ಶೆಟ್ಟರ,**
ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು,
ಶಿವಮೊಗ್ಗ.

**ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಶಿವಮೊಗ್ಗ ಘಟಕದಲ್ಲಿ ಶೀಘ್ರಲಿಪಿಗಾರ, ಬೆರಳಚ್ಚುಗಾರ, ಬೆರಳಚ್ಚು-ನಕಲುಗಾರ ಹಾಗೂ ಜವಾನ ಹುದ್ದೆಗಳ ನೇಮಕಾತಿಗಾಗಿ ಅರ್ಜಿ**

ಫೋಟೋ
ಅಂಟಿಸಲು ಜಾಗ

**ಗೆ,**

**ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು ,**
**ಶಿವಮೊಗ್ಗ.**

**ಮಾನ್ಯರೇ,**

**ತಮ್ಮ ಕಛೇರಿ ನೋಟಿಫಿಕೇಶನ್ ನಂಬರ್: ಎಡಿಎಂ.ಡಿಜೆಎಸ್. ----------------:2013 ದಿನಾಂಕ:22.2.2013 ಪ್ರಕಾರ ---------------- ಹುದ್ದೆಗೆ ನಾನು ಈ ಮೂಲಕ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸುತ್ತಿದ್ದೇನೆ.**

| | |
|---|---|
| 1. ಅಭ್ಯರ್ಥಿಯ ಹೆಸರು: | |
| 2. ತಂದೆಯ : ಗಂಡನ ಹೆಸರು: | |
| 3. ಲಿಂಗ | |
| 4. ಅಭ್ಯರ್ಥಿಯ ಖಾಯಂ ಅಂಚೆ ವಿಳಾಸ: ಹಾಗೂ ದೂರವಾಣಿ:ಮೊಬೈಲ್ ಸಂಖ್ಯೆ: | |
| 5. ಜನ್ಮ ದಿನಾಂಕ ಮತ್ತು ಅರ್ಜಿ ಸಲ್ಲಿಸಲು ನಿಗದಿಗೊಳಿಸಿದ ಕೊನೆಯ ದಿನಂಕದಂದು ವಯಸ್ಸು (ಜನ್ಮ ದಿನಾಂಕ ತೋರಿಸುವ ದಾಖಲೆಗಳನ್ನು ಕೊಡತಕ್ಕದ್ದು) | |
| 6. ಅಭ್ಯರ್ಥಿಯು ಹಾಲಿ ನೌಕರಿಯಲ್ಲಿರುವವರೇ? ಹಾಗಿದ್ದರೆ ಕೆಲಸದ ವಿವರ ಮತ್ತು ವಾರ್ಷಿಕ ಅದಾಯವನ್ನು ಕೊಡುವುದು. | |
| 7. ಅಭ್ಯರ್ಥಿಯ ತಂದೆ:ತಾಯಿ:ಪೋಷಕರ ಉದ್ಯೋಗ ಹಾಗೂ ಅವರ ವಾರ್ಷಿಕ ಆದಾಯ | |
| 8. ವಿದ್ಯಾರ್ಹತೆ (ಸಂಬಂಧಿಸಿದ ದಾಖಲಾತಿಗಳನ್ನು ಲಗತ್ತಿಸುವುದು) ವಿಸೂ: ಜವಾನ ಹುದ್ದೆಗೆ ಅರ್ಜಿಸಲ್ಲಿಸುವವರು 7ನೇ ತರಗತಿಯ ಅಂಕಗಳಿರುವ ಅಂಕಪಟ್ಟಿಯ ಪ್ರತಿಯನ್ನು ಕಡ್ಡಾಯವಾಗ ಲಗತ್ತಿಸಬೇಕು. | |
| 9. ರಾಷ್ಟ್ರೀಯತೆ, ಜಾತಿ ಮತ್ತು ಅಭ್ಯರ್ಥಿಯು ಯಾವ ವರ್ಗಕ್ಕೆ ಸೇರಿರುತ್ತಾರೆ? | |
| 10. ಅಭ್ಯರ್ಥಿಯು ಯಾವ ವರ್ಗದಡಿ ಅರ್ಜಿ ಸಲ್ಲಿಸುತ್ತಾರೆ? ( ಪ.ಜಾ, ಪ.ಪಂ. ಪ್ರವರ್ಗ-1, 2ಎ, 2ಬಿ, 3ಎ, 3ಬಿ, ) (ಗ್ರಾಮೀಣ, ಅಂಗವಿಕಲ, ಮಾಜಿ ಸೈನಿಕ,) (ತೋರಿಸಲು ಸಂಬಂಧಪಟ್ಟವರಿಂದ ನೀಡಲ್ಪಟ್ಟ ಪ್ರಮಾಣಪತ್ರಗಳ ನಕಲನ್ನು ಹಾಜರುಪಡಿಸುವುದು) | |
| 11. ಅಭ್ಯರ್ಥಿಯು ವಿಧವೆ:ಅಂಗವಿಕಲ:ಮಾಜಿಸೈನಿಕರೇ? (ಸಂಬಂಧಪಟ್ಟವರಿಂದ ಪಡೆದ ದಾಖಲಾತಿಗಳನ್ನು ಹಾಜರುಪಡಿಸುವುದು) | |
| 12. ಅರ್ಜಿದಾರರು ಸಲ್ಲಿಸಲು ಇಚ್ಛಿಸಿರುವ ಇತರೆ ಯಾವುದಾದರೂ ವಿವರಗಳು | |

ಮೇಲೆ ವಿವರಿಸಿರುವ ಸಂಗತಿಗಳು ಸತ್ಯವಾದುದೆಂದು ಈ ಮೂಲಕ ಘೋಷಿಸುತ್ತೇನೆ ಮತ್ತು ಯಾವುದಾದರೂ ಸಂಗತಿಗಳು ಸುಳ್ಳು ಎಂದು ಕಂಡುಬಂದಲ್ಲಿ ನನ್ನ ನೇಮಕಾತಿಯನ್ನು ರದ್ದು ಮಾಡಬಹುದಾಗಿದೆ..

ದಿನಾಂಕ:

ಸ್ಥಳ :

**ಅಭ್ಯರ್ಥಿಯ ರುಜು.**

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಿಗಳ ದೃಢೀಕರಣ ಪತ್ರ**

ಶ್ರೀ : ಶ್ರೀಮತಿ ........................................................ ಇವರು ನಮ್ಮ ಇಲಾಖೆಯಲ್ಲಿ ದಿನಾಂಕ:..................................ರಿಂದ ........................................................ರವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ...................................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು .......................................ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿಯನ್ನು ನೀಡಲಾಗಿದೆ.

ಸಹಿ :

ಸ್ಥಳ: ಪದನಾಮ :

ದಿನಾಂಕ: ಕಛೇರಿಯ ಮೊಹರು :